


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 700(874)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪ್ರಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

ವಿಷಯ : ರಾಜ್ಯದಿಂದ FCI ದಿಂದ ಖರೀದಿ ಮತ್ತು ರಾಜ್ಯಕ್ಕೆ ನೀಡುವ ಆಹಾರ ಧಾನ್ಯಗಳ ಕುರಿತು

(ಅ) ಕಳೆದ 05 ವರ್ಷಗಳಲ್ಲಿ ಕರ್ನಾಟಕದ ಎ.ಪಿ.ಎಂ.ಸಿ. ಮುಖಾಂತರ ಫುಡ್ ಕಾರ್ಪೋರೇಷನ್ ಆಫ್ ಇಂಡಿಯಾ (FCI) ಮೂಲಕ ಕೇಂದ್ರ ಸರ್ಕಾರವು ಖರೀದಿಸಿದ ಪ್ರಮಾಣ ಎಷ್ಟು; (ಆಹಾರ ಧಾನ್ಯಗಳ ಐಟಂವಾರು, ವರ್ಷವಾರು, ಖರೀದಿವಾರು ತಖ್ತೆ ಒದಗಿಸುವುದು ಮತ್ತು ಫುಡ್ ಕಾರ್ಪೋರೇಷನ್ ಆಫ್ ಇಂಡಿಯಾ (FCI) ಮೂಲಕ ಕೇಂದ್ರ ಸರ್ಕಾರವು ಕರ್ನಾಟಕಕ್ಕೆ ಪಡಿತರ ವಿತರಣೆಗಾಗಿ ಮಂಜೂರು ಮಾಡಿದ ಆಹಾರ ಧಾನ್ಯಗಳ ಐಟಂವಾರು, ಘಟಕವಾರು, ವರ್ಷವಾರು, ಖರೀದಿವಾರು ತಖ್ತೆ ಒದಗಿಸುವುದು) ಈ ಆಹಾರ ಧಾನ್ಯಗಳನ್ನು ಎಲ್ಲಿ ಶೇಖರಣೆ ಮಾಡಲಾಗಿದೆ; ಇದಕ್ಕೆ ಗುರಿ ನಿಗದಿಪಡಿಸಲಾಗಿದೆಯೇ;

(ಆ) ಖಾಸಗಿ ಸಂಸ್ಥೆಗಳಿಗೆ ಆಹಾರ ಧಾನ್ಯ ಸಂಗ್ರಹಿಸುವ ಅಧಿಕಾರ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಖಾಸಗಿ ಸಂಸ್ಥೆಗಳಿಗೆ ಪರವಾನಿಗೆ ನೀಡಲಾಗಿದೆ; ಅವು ಯಾವುವು; (FCI) ಗೆ ಹೊರತಾಗಿ ಖರೀದಿ ಮಾಡಿ ಪಡಿತರ ವ್ಯವಸ್ಥೆಗೆ ವಿತರಣೆ ಮಾಡಿದ ಆಹಾರ ಧಾನ್ಯಗಳ ಐಟಂವಾರು, ವರ್ಷವಾರು, ಖರೀದಿವಾರು ತಖ್ತೆ ಒದಗಿಸುವುದು;

(ಇ) ಖಾಸಗಿಯವರಿಗೆ ಪರವಾನಿಗೆ ನೀಡಿದಲ್ಲಿ ಆಹಾರ ಧಾನ್ಯಗಳ ದರದ ಮೇಲಿನ ನಿಯಂತ್ರಣ ಸರ್ಕಾರದ ಕೈತಪ್ಪಿ ಹೋಗುವುದಿಲ್ಲವೇ; ಖಾಸಗಿಯವರು ದುರ್ಬಳಕೆ ಮಾಡಿಕೊಂಡು ಆಹಾರ ಧಾನ್ಯಗಳ ಕೃತಕ ಅಭಾವ ಸೃಷ್ಟಿಸಿ ಬೆಲೆಗಳನ್ನು ಏರಿಸುವ ಅಪಾಯದ ಬಗ್ಗೆ ಸರ್ಕಾರ ಚಿಂತನೆ ನಡೆಸಿದೆಯೇ; ಈ ಬಗ್ಗೆ ಸರ್ಕಾರ ತೆಗೆದುಕೊಳ್ಳುವ ಕ್ರಮಗಳಾವುವು?